

ಕರ್ನಾಟಕ

# ಸ್ಕೌಟ್ ಮತ್ತು ಗೈಡ್

KARNATAKA SCOUT & GUIDE

News Magazine

VOL.2 DECEMBER 2002 No. 11


## ಬಾಗಲಕೋಟೆ ಜಿಲ್ಲೆಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಆಡ[illegible] ಕಛೇರಿಗೆ ಶಂಕುಸ್ಥಾಪನ ಕಾರ್ಯಕ್ರಮ



ಜ್ಯೋತಿ ಬೆಳಗುತ್ತಿರುವ ಸನ್ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣ, ಇವರೊಂದಿಗೆ ಪಾಲ್ಗೊಂಡ ಶ್ರೀ ಪಿ.ಎಚ್. ಪೂಜಾರ, ಶಾಸಕರು, ಬಾಗಲಕೋಟ, ಶ್ರೀ ಎಸ್.ಜಿ. ನಂಜಯ್ಯನ ಮಠ, ಶಾಸಕರು, ಗುಳೇದಗುಡ್ಡ, ಶ್ರೀ ಸಿದ್ದು ನ್ಯಾಮಗೌಡ, ಮಾಜಿ ಕೇಂದ್ರ ಸಚಿವರು, ಶ್ರೀ ಎಚ್.ಕೆ. ಪಾಟೀಲ, ಜಲಸಂಪನ್ಮೂಲ ಸಚಿವರು, ಶ್ರೀ ಜಿ.ಎನ್. ಪಾಟೀಲ, ಅಧ್ಯಕ್ಷರು, ಬಿ.ಟಿ.ಡಿ.ಎ., ಶ್ರೀ ಆರ್. ಎಸ್. ಪಾಟೀಲ, ಲೋಕಸಭಾ ಸದಸ್ಯರು, ಬಾಗಲಕೋಟ, ಶ್ರೀ ಆರ್.ಬಿ. ತಿಮ್ಮಾಪೂರ, ಬಾಗಲಕೋಟ ಜಿಲ್ಲಾ ಉಸ್ತುವಾರಿ ಸಚಿವರು, ಶ್ರೀಎಮ್.ಪಿ.ನಾಡಗೌಡ, ವಿಧಾನ್ ಪರಿಷತ್ ಸದಸ್ಯರು, ಬಾಗಲಕೋಟ, ಶ್ರೀ ಎಸ್.ಆರ್. ಪಾಟೀಲ, ವಿಧಾನ ಪರಿಷತ್ ಸದಸ್ಯರು, ಬಾಗಲಕೋಟ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಅಧ್ಯಕ್ಷರು, ಅವರುಗಳನ್ನು ಕಾಣಬಹುದು.




ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್
೮೫ ವರ್ಷಗಳ ಪರಿಪೂರ್ಣ ಸೇವೆಯಲ್ಲಿ

**1917-2002**


ಪ್ರಕಾಶಕರು : ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ



# THE BHARAT SCOUTS & GUIDES, KARNATAKA

## CALENDAR 2003

### JANUARY

| | | | | | |
|---|---|---|---|---|---|
| SUN | | 5 | 12 | 19 | 26 |
| MON | | 6 | 13 | 20 | 27 |
| TUE | | 7 | 14 | 21 | 28 |
| WED | 1 | 8 | 15 | 22 | 29 |
| THU | 2 | 9 | 16 | 23 | 30 |
| FRI | 3 | 10 | 17 | 24 | 31 |
| SAT | 4 | 11 | 18 | 25 | |

### FEBRUARY

| | | | | | |
|---|---|---|---|---|---|
| SUN | | 2 | 9 | 16 | 23 |
| MON | | 3 | 10 | 17 | 24 |
| TUE | | 4 | 11 | 18 | 25 |
| WED | | 5 | 12 | 19 | 26 |
| THU | | 6 | 13 | 20 | 27 |
| FRI | | 7 | 14 | 21 | 28 |
| SAT | 1 | 8 | 15 | 22 | |

### MARCH

| | | | | | |
|---|---|---|---|---|---|
| SUN | 30 | 2 | 9 | 16 | 23 |
| MON | 31 | 3 | 10 | 17 | 24 |
| TUE | | 4 | 11 | 18 | 25 |
| WED | | 5 | 12 | 19 | 26 |
| THU | | 6 | 13 | 20 | 27 |
| FRI | | 7 | 14 | 21 | 28 |
| SAT | 1 | 8 | 15 | 22 | 29 |

### APRIL

| | | | | | |
|---|---|---|---|---|---|
| SUN | | 6 | 13 | 20 | 27 |
| MON | | 7 | 14 | 21 | 28 |
| TUE | 1 | 8 | 15 | 22 | 29 |
| WED | 2 | 9 | 16 | 23 | 30 |
| THU | 3 | 10 | 17 | 24 | |
| FRI | 4 | 11 | 18 | 25 | |
| SAT | 5 | 12 | 19 | 26 | |

### MAY

| | | | | | |
|---|---|---|---|---|---|
| SUN | | 4 | 11 | 18 | 25 |
| MON | | 5 | 12 | 19 | 26 |
| TUE | | 6 | 13 | 20 | 27 |
| WED | | 7 | 14 | 21 | 28 |
| THU | 1 | 8 | 15 | 22 | 29 |
| FRI | 2 | 9 | 16 | 23 | 30 |
| SAT | 3 | 10 | 17 | 24 | 31 |

### JUNE

| | | | | | |
|---|---|---|---|---|---|
| SUN | 1 | 8 | 15 | 22 | 29 |
| MON | 2 | 9 | 16 | 23 | 30 |
| TUE | 3 | 10 | 17 | 24 | |
| WED | 4 | 11 | 18 | 25 | |
| THU | 5 | 12 | 19 | 26 | |
| FRI | 6 | 13 | 20 | 27 | |
| SAT | 7 | 14 | 21 | 28 | |

### JULY

| | | | | | |
|---|---|---|---|---|---|
| SUN | | 6 | 13 | 20 | 27 |
| MON | | 7 | 14 | 21 | 28 |
| TUE | 1 | 8 | 15 | 22 | 29 |
| WED | 2 | 9 | 16 | 23 | 30 |
| THU | 3 | 10 | 17 | 24 | 31 |
| FRI | 4 | 11 | 18 | 25 | |
| SAT | 5 | 12 | 19 | 26 | |

### AUGUST

| | | | | | |
|---|---|---|---|---|---|
| SUN | 31 | 3 | 10 | 17 | 24 |
| MON | | 4 | 11 | 18 | 25 |
| TUE | | 5 | 12 | 19 | 26 |
| WED | | 6 | 13 | 20 | 27 |
| THU | | 7 | 14 | 21 | 28 |
| FRI | 1 | 8 | 15 | 22 | 29 |
| SAT | 2 | 9 | 16 | 23 | 30 |

### SEPTEMBER

| | | | | | |
|---|---|---|---|---|---|
| SUN | | 7 | 14 | 21 | 28 |
| MON | 1 | 8 | 15 | 22 | 29 |
| TUE | 2 | 9 | 16 | 23 | 30 |
| WED | 3 | 10 | 17 | 24 | |
| THU | 4 | 11 | 18 | 25 | |
| FRI | 5 | 12 | 19 | 26 | |
| SAT | 6 | 13 | 20 | 27 | |

### OCTOBER

| | | | | | |
|---|---|---|---|---|---|
| SUN | | 5 | 12 | 19 | 26 |
| MON | | 6 | 13 | 20 | 27 |
| TUE | | 7 | 14 | 21 | 28 |
| WED | 1 | 8 | 15 | 22 | 29 |
| THU | 2 | 9 | 16 | 23 | 30 |
| FRI | 3 | 10 | 17 | 24 | 31 |
| SAT | 4 | 11 | 18 | 25 | |

### NOVEMBER

| | | | | | |
|---|---|---|---|---|---|
| SUN | 31 | 2 | 9 | 16 | 23 |
| MON | | 3 | 10 | 17 | 24 |
| TUE | | 4 | 11 | 18 | 25 |
| WED | | 5 | 12 | 19 | 26 |
| THU | | 6 | 13 | 20 | 27 |
| FRI | | 7 | 14 | 21 | 28 |
| SAT | 1 | 8 | 15 | 22 | 29 |

### DECEMBER

| | | | | | |
|---|---|---|---|---|---|
| SUN | | 7 | 14 | 21 | 28 |
| MON | 1 | 8 | 15 | 22 | 29 |
| TUE | 2 | 9 | 16 | 23 | 30 |
| WED | 3 | 10 | 17 | 24 | 31 |
| THU | 4 | 11 | 18 | 25 | |
| FRI | 5 | 12 | 19 | 26 | |
| SAT | 6 | 13 | 20 | 27 | |



# ಕರ್ನಾಟಕ ಸ್ಕೌಟ್ ಮತ್ತು ಗೈಡ್
# KARNATAKA SCOUT AND GUIDE

STATE MONTHLY NEWS MAGAZINE

**Vol - 2** **December - 2002** **No.11**

## ಸಂಪಾದಕ ಮಂಡಳಿ

ಅಧ್ಯಕ್ಷರು
**ಗೊ. ರು. ಚನ್ನಬಸಪ್ಪ**

ಸಂಪಾದಕರು
**ಚಿನ್ನಸ್ವಾಮಿ ರೆಡ್ಡಿ**

ಉಪ ಸಂಪಾದಕರು
**ಎಂ. ಎ. ಚೆಲ್ಲಯ್ಯ**

ಸದಸ್ಯರು
**ಎಂ. ಶಾಂತಿಮತಿ**
**ಎ. ಶಿವಮಹಾದೇವನ್**
**ನಾರಾಯಣಶೆಟ್ಟಿ**
**ಜಾನಕಿ ವೇಣುಗೋಪಾಲ್**
**ಎನ್. ಶ್ರೀನಿವಾಸನ್**

## ಪರಿವಿಡಿ



"ತಾತ್ಕಾಲಿಕ ಅಡಚಣೆಗಳಿಂದ ನಿರಾಸೆಗಳಿಂದ ಅಧೀರರಾಗಬೇಕಾಗಿಲ್ಲ; ಇಂಥವು ಆಗಿಂದಾಗ್ಗೆ ಬರುವಂಥವೇ. ಅವು ನಮ್ಮ ಉದ್ಧಾರಕ್ಕೆ ಸಾರವಿದ್ದಂತೆ. ಅವುಗಳನ್ನೆಲ್ಲಾ ಮೆಟ್ಟಿನಿಂತು ನಾವು ನಮ್ಮ ಉದಾತ್ತ ಧ್ಯೇಯದ ಮಹತ್ವಕ್ಕೆ ಗಮನ ನೀಡೋಣ"

- ಬೇಡನ್ ಪೊವೆಲ್

# ರಾಜ್ಯ ಮುಖ್ಯ ಆಯುಕ್ತರ ನುಡಿ

**ಆತ್ಮೀಯರೇ**

ದಿನಾಂಕ 14-11-2002 ರಂದು ಕೊಂಡಜ್ಜಿ ತರಬೇತಿ ಕೇಂದ್ರಕ್ಕೆ ಮತ್ತೊಂದು ಉಗ್ರಾಣ ಕೊಠಡಿ ಲಭ್ಯವಾಗಿದೆ. ದಿ|| ಎನ್.ಎಂ. ಗುರುಸ್ವಾಮಿಯವರ ಪತ್ನಿ ಶ್ರೀಮತಿ ಅಂಬುಜಮ್ಮ ಗುರುಸ್ವಾಮಿಯವರು ನೀಡಿದ 25,000/- ರೂ. ಗಳ ದಾನದೊಂದಿಗೆ ಸಂಸ್ಥೆಯ ಹಣವೂ ಸೇರಿಸಿ **"ನರಗನಹಳ್ಳಿ ಎಂ. ಗುರುಸ್ವಾಮಿ ಉಗ್ರಾಣ ಕೊಠಡಿ"** ಯನ್ನು ಹರಿಹರ ಶಾಸಕರಾದ ಡಾ|| ವೈ. ನಾಗಪ್ಪ ಅವರು ಉದ್ಘಾಟಿಸಿದರು. ಜಿಲ್ಲಾ ಪಂಚಾಯಿತ್ತಿ ಅಧ್ಯಕ್ಷರಾದ ಶ್ರೀ ಜಿ. ದ್ಯಾಮಪ್ಪ ಹಾಗೂ ಸದಸ್ಯರುಗಳಾದ ಶ್ರೀ ಹನಗವಾಡಿ ವಿರುಪಾಕ್ಷಪ್ಪ ಮತ್ತು ಶ್ರೀ ಕೆ. ಬಸವರಾಜಪ್ಪ ಹಾಗೂ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಕೆ.ಬಿ. ರಾಮಲಿಂಗಪ್ಪನವರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಈ ಕಾರ್ಯಕ್ಕೆ ಹೃತ್ಪೂರ್ವಕವಾಗಿ ದಾನ ನೀಡಿ ಕಟ್ಟಡ ನಿರ್ಮಾಣಕ್ಕೆ ನೆರವಾದ ಶ್ರೀಮತಿ ಅಂಬುಜಮ್ಮ ಗುರುಸ್ವಾಮಿ ಅವರಿಗೆ ನನ್ನ ನಮನಗಳು.

ನಮ್ಮ ರಾಜ್ಯದಿಂದ ದೂರದ ಮಧ್ಯಪ್ರದೇಶದಲ್ಲಿರುವ ರಾಷ್ಟ್ರೀಯ ತರಬೇತಿ ಶಿಬಿರ, ಪಚಮರಿಗೆ ಹೆಚ್ಚಿನ ತರಬೇತಿಗೆ ಹೋಗಲೇಬೇಕಾದ್ದು ಅನಿವಾರ್ಯ ಸಂಗತಿ. ಆದರೆ ನಮ್ಮಗಳ ಸುಯೋಗ ಹಾಗೂ ನಮ್ಮ ತರಬೇತಿ ಶಿಬಿರಗಳಲ್ಲಿರುವ ಸಂಪನ್ಮೂಲಗಳ ದೃಷ್ಟಿಯಿಂದ ರಾಷ್ಟ್ರೀಯ ತರಬೇತಿ ಶಿಬಿರದವರು ಇತ್ತೀಚಿಗೆ ಪ್ರೀ.ಎ.ಎಲ್.ಟಿ. (ಸ್ಕೌಟ್ಸ್) ಹಾಗೂ (ಗೈಡ್ಸ್) ಶಿಬಿರಗಳನ್ನು "ಬೆಸೆಂಟ್ ಪಾರ್ಕ್" ತರಬೇತಿ ಕೇಂದ್ರದಲ್ಲಿ ನಡೆಸಿರುವುದು ನಮಗೆಲ್ಲಾ ಹೆಮ್ಮೆ ಹಾಗೂ ಅಭಿಮಾನದ ವಿಷಯ. ಈ ತಿಂಗಳ 9 ರಿಂದ 13ರ ವರೆವಿಗೆ ಪ್ರೀ.ಎ.ಎಲ್.ಟಿ. (ಗೈಡ್ಸ್) ತರಬೇತಿ ಶಿಬಿರದಲ್ಲಿ ನಮ್ಮ ರಾಜ್ಯದಿಂದ 32 ಅಭ್ಯರ್ಥಿಗಳು ಹಾಗೂ ತಮಿಳುನಾಡಿನಿಂದ ಇಬ್ಬರು ಹಾಗೂ ಹೈದರಾಬಾದಿನಿಂದ ಒಬ್ಬರು ಭಾಗವಹಿಸಿದ್ದರು. ರಾಜ್ಯದಿಂದ ಅರ್ಹತೆ ಇರುವ ಇನ್ನೂ ಹಲವರು ತರಬೇತಿಯ ಪ್ರಯೋಜನ ಪಡೆದಿದ್ದರೆ, ಜಿಲ್ಲಾ ಹಾಗೂ ರಾಜ್ಯ ಸಂಸ್ಥೆಗೆ ಹೆಚ್ಚಿನ ಉಪಯೋಗವಾಗುತ್ತಿತ್ತು. ಮುಂದಿನ ದಿನಗಳಲ್ಲಿ ಇಂತಹ ಸದವಕಾಶಗಳು ನಮ್ಮ ಪಾಲಿಗೆ ಬಂದಾಗ ಅದರ ಸಂಪೂರ್ಣ ಉಪಯೋಗ ಮಾಡಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

ಈ ತಿಂಗಳ 28 ರಿಂದ ಜನವರಿ 7, 2003ರ ವರೆವಿಗೆ ಥಾಯ್ಲೆಂಡಿನ - ಸತಾಹಿಪ್ - ಚೋನ್‌ಬುರಿಯಲ್ಲಿ ನಡೆಯಲಿರುವ 20ನೇ ಅಂತರಾಷ್ಟ್ರೀಯ ಸ್ಕೌಟ್ ಜಾಂಬೋರಿಯಲ್ಲಿ ನಮ್ಮ ರಾಜ್ಯದಿಂದ 6 ಸ್ಕೌಟ್‌ಗಳು ಹಾಗೂ 8 ನಾಯಕರುಗಳು ಭಾಗವಹಿಸುತ್ತಿದ್ದಾರೆ. ರಾಷ್ಟ್ರದಿಂದ ಪ್ರಥಮ ಬಾರಿಗೆ 200 ಪ್ರತಿನಿಧಿಗಳು ಈ ಸಮಾವೇಶದಲ್ಲಿ ಪಾಲ್ಗೊಳ್ಳಲಿದ್ದಾರೆ. ಈ ಅಂತರಾಷ್ಟ್ರೀಯ ಮೇಳದ ಅನುಭವ - ವಿಚಾರಗಳು ಮುಂದಿನ ದಿನಗಳಲ್ಲಿ ಚಳುವಳಿಯ ದಿಕ್ಕನ್ನು ಇನ್ನಷ್ಟು ಎತ್ತರಕ್ಕೆ ರಾಜ್ಯದಲ್ಲಿ ಬೆಳಸುವಲ್ಲಿ ಸಹಕಾರಿಯಾಗುವುದೆಂದು ಆಶಿಸುತ್ತೇನೆ.

ಇತ್ತೀಚೆಗೆ ಕನ್ಯಾಕುಮಾರಿಯಲ್ಲಿ ಜರುಗಿದ 55ನೇ ಹಿಮಾಲಯ ವುಡ್ ಬ್ಯಾಡ್ಜ್ ಹೋಲ್ಡರ್ಸ್ ಸಮಾವೇಶ 28-11-2002 ರಿಂದ 2-12-2002 ರವರೆಗೆ ಯಶಸ್ವಿಯಾಗಿ ಜರುಗಿದ ವರದಿ ಬಂದಿದೆ. ರಾಜ್ಯದ ಎಲ್ಲಾ ಜಿಲ್ಲೆಗಳಿಂದ 329 ವೃಕ್ಷಮಣಿದಾರಿಗಳು ಭಾಗವಹಿಸಿ ತಮ್ಮ ಜ್ಞಾನ ಹಾಗೂ ಅನುಭವವನ್ನು ಹೆಚ್ಚಿಸಿಕೊಂಡಿರುವ ಬಗ್ಗೆ ನನಗೆ ಹಲವಾರು ಪತ್ರಗಳು ಬಂದಿವೆ. ರಾಜ್ಯದ ಎಲ್ಲಾ ವೃಕ್ಷ ಮಣಿದಾರಿಗಳು ಸಂಸ್ಥೆಯ ಚಟುವಟಿಕೆಗಳನ್ನು ರಾಜ್ಯದ ಉದ್ದಗಲಕ್ಕೂ ಹೆಚ್ಚಿಸುವಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು, ತಮ್ಮ ಜ್ಞಾನ ಹಾಗೂ ಅನುಭವವನ್ನು ಯುವಜನಾಂಗದ ಅಭಿವೃದ್ಧಿ-ಬೆಳವಣಿಗೆಗೆ ಮುಡುಪಾಗಿಡಬೇಕೆಂದು ಆಶಿಸುತ್ತೇನೆ.

ಇತ್ತೀಚೆಗೆ ಯುವಜನ ಸೇವಾ ಹಾಗೂ ಕ್ರೀಡಾ ಇಲಾಖೆಯ ಆಯುಕ್ತರಾಗಿ ರಾಜ್ಯದ ಹಿರಿಯ ಅಧಿಕಾರಿಗಳಾದ ಶ್ರೀ ಕೆ.ಹೆಚ್. ಗೋಪಾಲಕೃಷ್ಣೇಗೌಡ ಅಧಿಕಾರ ವಹಿಸಿಕೊಂಡಿರುತ್ತಾರೆ. ಈ ತಿಂಗಳ 6 ರಂದು ಶ್ರೀಯುತರು ತಮ್ಮ ಧರ್ಮಪತ್ನಿಯೊಂದಿಗೆ ಕೊಂಡಜ್ಜಿ ಶಿಬಿರ ಕೇಂದ್ರಕ್ಕೆ ಭೇಟಿಕೊಟ್ಟು ಶಿಬಿರವನ್ನು ವೀಕ್ಷಿಸಿದರು. ಈ ಸಂದರ್ಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ಉಪಾಧ್ಯಕ್ಷರಾದ ಶ್ರೀ ಆರ್. ವೆಂಕಣ್ಣ, ಕೇಂದ್ರ ಕಚೇರಿ ಆಯುಕ್ತ ಶ್ರೀ ಎಂ.ಎ. ಚೆಲ್ಲಯ್ಯ ಅವರೊಂದಿಗಿದ್ದು ಶಿಬಿರದ ಬೆಳವಣಿಗೆ ಹಾಗೂ ಚಳವಳಿಯ ಬಗ್ಗೆ ವಿವರಗಳನ್ನು ನೀಡಿದರು.

ರಾಜ್ಯ ಸಂಸ್ಥೆಯ ಇಬ್ಬರು ಸಂಘಟನಾ ಆಯುಕ್ತರುಗಳಾದ ಕುಮಾರಿ ಪಿ. ಸರೋಜ ಹಾಗೂ ಶ್ರೀ ಕೆ. ತಿಮ್ಮಪ್ಪ ಇತ್ತೀಚೆಗೆ ಸಂಸ್ಥೆಯ ಸೇವೆಯಿಂದ ನಿವೃತ್ತರಾಗಿದ್ದಾರೆ. ಇವರುಗಳು ಮೂರು ದಶಕಗಳ ಕಾಲ ಸಂಸ್ಥೆಯಲ್ಲಿ ನಿಷ್ಠೆ ಹಾಗೂ ಪ್ರಾಮಾಣಿಕತೆಯಿಂದ ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಹಿಸಿದ್ದಾರೆ. ಇವರ ನಿವೃತ್ತ ಜೀವನ ಅತ್ಯಂತ ಸುಖಕರವಾಗಿರಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

2002ನೇ ವರ್ಷದ ಕೊನೆ ಹಾಗೂ 2003ರ ಶುಭಾರಂಭದಲ್ಲಿದ್ದೇವೆ. ಜಗತ್ತಿನಾದ್ಯಂತ ಸಡಗರದ **"ಕ್ರಿಸ್‌ಮಸ್"** ಹಬ್ಬ ಎಲ್ಲರಿಗೂ ಶುಭವನ್ನುಂಟು ಮಾಡಲಿ ಹಾಗೂ ನೂತನ ವರ್ಷದಲ್ಲಿ ಸಂಸ್ಥೆಯ ಕಾರ್ಯಯೋಜನೆಗಳು ಯಶಸ್ವಿಯಾಗುವಲ್ಲಿ ಭಗವಂತನ ಹಾಗೂ ಗುರು - ಹಿರಿಯರ ಮಾರ್ಗದರ್ಶನ ನಮಗೆಲ್ಲಾ ಸದಾ ದೊರೆಯುವಂತಾಗಲಿ ಎಂದು ಪ್ರಾರ್ಥಿಸುತ್ತೇನೆ. ಉಳಿದಿರುವ ಎರಡು ತಿಂಗಳಲ್ಲಿ ನಾವುಗಳೇ ಹಾಕಿಕೊಂಡಿರುವ ಮಾರ್ಗದರ್ಶಿ ಸೂತ್ರದಂತೆ - ಎಲ್ಲಾ ತರಬೇತಿ ಶಿಬಿರಗಳನ್ನು ನಡೆಸಿ - ನಮ್ಮ ನಮ್ಮ ತಾಲ್ಲೂಕಿಗೆ - ಜಿಲ್ಲೆಗಳಿಗೆ ಕೊಟ್ಟಿರುವ ದಳಗಳ ಅಂಕಿ - ಸಂಖ್ಯೆಗಳನ್ನು ನವೀಕರಿಸಿ - ಹೆಚ್ಚಿಸಿ ರಾಜ್ಯ ಸಂಸ್ಥೆಯ 2002-2003ರ ಯೋಜನೆಯ ಗುರಿಯನ್ನು ತಲುಪುವಲ್ಲಿ ಸಂಪೂರ್ಣ ಗಮನಹರಿಸಬೇಕೆಂದು ತಮ್ಮಲ್ಲಿ ಪ್ರಾರ್ಥಿಸುತ್ತೇನೆ.

ಕೊ. ಬಿ. ಷಣ್ಮುಖಪ್ಪ

**(ಕೊಂಡಜ್ಜಿ ಬಿ. ಷಣ್ಮುಖಪ್ಪ)**
ರಾಜ್ಯ ಮುಖ್ಯ ಆಯುಕ್ತರು

# GADAG DISTRICT TO HOST
# 26th State Level Cub and Bul Bul Utsav

**BS & G NEWS SERVICE**

***Bangalore Dec' 10***

*The 26th State Level Cub and Bul Bul Utsav of the Bharat Scouts and Guides, Karnataka will be held at the Premises of the Municipal Composite Pre-University College, Station Road, Gadag from 27th Jan to 31st Jan' 2003. Nearly 1000 Cubs and Bulbuls (05 to 10 Years Boys and Girls) from all over Karnataka will be participating in the State Level Event.*

*The Gadag District is Hosting the Event under the Chairmanship of Sri V.R. Patel, IAS, Deputy Commissiioner of Gadag. Various Sub Committees have been Constituted involving Officials from Zilla Panchayat, Education, Health, PWD, Police, City Municipality and other Government Departments. President. Zilla Panchayat, President City Municipality and Philonthropists are extending full Support to Organise the State Level Event.*

*The activities for the event are Adventure Activities Make Things, Jungleplay, Tara Story, Exhibition, Folk Fest, Camp Fire, Route March, All Faith Paryer, Visit to Places of interest around Gadag.*

# OBSERVANCE OF
# NATIONAL YOUTH DAY ON 12 JANUARY 2003

*The Bharat Scouts and Guides will observe the Birth Day of Swami Vivekananda as National Youth Day on 12th January every year. The Government of India has declared to Observe the 12th January as National Youth Day: The Bharat Scouts and Guides is the largest Movement of the Youths of our Country. The Karnataka State Bharat Scouts and Guides appeal to Observe the ensuing National Youth Day on 12th January 2003 in a befitting manner at the Unit, Taluk and the District Levels all over Karnataka.*



## 150 Scouts and Guides rendered service at the 46th All India Police Duty Meet

**Bangalore, 12.** The Government of Karnataka Organised the 46th All India Police Duty Meet at the Kanteerava Stadium, Bangalore from 12th to 15th December 2002, Bangalore.Sri T.N. Chaturvedi, His Excellency the Governor of Karnataka, Inaugurated the Meet on 12th Dec 2002 and Sri S.M. Krishna, Hon'ble Chief Minister of Karnataka delivered the valedectory address on 15th Dec 2002. 150 Scouts and Guides of The Bharat Scouts and Guides, Karnataka rendered Service at the Police Duty Meet on 12th and 15th December 2002.

## 4th National Level Painting Competition-2002

*A National Level Painting Competition will be held to help the creative talents of the members of our Movement flourish. Four best entries from each of the following groups will be selected by the State and forwarded to the National Headquarters for final selection, I, II and III prizes will be awarded to the participants in each category. District must send the selected entries to the State Headquarters, Bangalore latest by 6th Jan., 2003.*

| *Section* | *Age Group* | *Themes* |
|---|---|---|
| Cub / Bulbul | 05 - 10 Years | ✣ A scene of the Camp Life. ✣ Group games |
| | | ✣ My Country. ✣ Scout / Guide : Friend to all |
| Scout / Guides | 10 - 13 Years | ✣ Service to Mankind ✣ Camp Fire |
| | | ✣ Scout / Guide Mela. ✣ Festival |
| Scout / Guide | 14 - 16 Years | ✣ National Festival (Independence Day / Republic Day). |
| | | ✣ National Integration, All Faith Prayer |
| | | ✣ Campaign (Road Safety, Literacy, Anti - Leprosy). |
| | | ✣ Camp Life, Campfire, Marching together |
| | | ✣ Free time Amusement & Entertainment |
| Rover / Ranger | 17-25 years | ✣ Rover / Ranger in tune with Nature |
| | | ✣ Adventure |
| | | ✣ Group Skill Training ✣ Serving the Humanity |

# ರಾಜ್ಯ ಮಟ್ಟದ 55ನೇಯ ಹಿಮಾಲಯ ವುಡ್ ಬ್ಯಾಡ್ಜ್ ಹೋಲ್ಡರ್ಸ್ ಸಮಾವೇಶ

**ಕೆಎಸ್‌ಜಿ ವಾರ್ತೆಗಳು**

ದಿನಾಂಕ : 28-11-2002 ರಿಂದ 02-12-2002ರ ವರೆಗೆ ವಿವೇಕಾನಂದ ಕೇಂದ್ರ, ವಿವೇಕಾನಂದಪುರಂ, ಕನ್ಯಾಕುಮಾರಿ, ತಮಿಳುನಾಡುನಲ್ಲಿ ಜರುಗಿತು.

ರಾಜ್ಯದ 28 ಸ್ಕೌಟ್ ಮತ್ತು ಗೈಡ್ಸ್ ಜಿಲ್ಲೆಗಳಿಂದ 329 ವುಡ್ ಬ್ಯಾಡ್ಜ್ ಹೋಲ್ಡರ್ಸ್‌ಗಳು ಸಮಾವೇಶದಲ್ಲಿ ಭಾಗವಹಿಸಿದ್ದರು.

28-11-2002 ರಂದು ಬೆಳಿಗ್ಗೆ 7.30 ಕ್ಕೆ ಪ್ರಾರ್ಥನೆ ಧ್ವಜಾರೋಹಣದೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. 9.00 ಗಂಟೆಗೆ ವಿವೇಕಾನಂದ ಕೇಂದ್ರದ ಹಿರಿಯ ಸೇವಾ ಕರ್ತರಾದ ಶ್ರೀ ಗೋಪಾಲ ಕೃಷ್ಣರವರು ಜ್ಯೋತಿ ಬೆಳಗಿಸುವುದರ ಮೂಲಕ ಸಮಾವೇಶವನ್ನು ಉದ್ಘಾಟಿಸಿದರು.

ಶ್ರೀ ಆಂಗ್ರೆಸ್ ಹಜರತ್ ಮತ್ತೊಬ್ಬ ಹಿರಿಯ ಸೇವಾ ಕರ್ತರು ಅಭ್ಯರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು.



ಶ್ರೀ ಆಂಗ್ರೆಸ್ ಹಜರತ್ ಸೇವಾ ಕರ್ತರು ದೀಪ ಹಚ್ಚುತ್ತಿರುವುದು.



ಶ್ರೀ ಗೋಪಾಲ ಕೃಷ್ಣ ಹಿರಿಯ ಸೇವಾ ಕರ್ತರು ಸಮಾವೇಶವನ್ನು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸುತ್ತಿರುವುದು.

ಈ ಕೆಳಕಂಡ ವಿಷಯಗಳ ಬಗ್ಗೆ ಸಮಾವೇಶದಲ್ಲಿ ಚರ್ಚಿಸಲಾಯ್ತು.

ಸಮಾವೇಶದ ಉದ್ದೇಶಗಳು, ಮೂಲತತ್ವಗಳು, ಹಿಮಾಲಯ ವುಡ್ ಬ್ಯಾಡ್ಜ್ ಪದವೀಧರರ ಕರ್ತವ್ಯ ಮತ್ತು ಜವಾಬ್ದಾರಿಗಳು, ರಾಜ್ಯ ಪುರಸ್ಕಾರ ಪರೀಕ್ಷಾ ಪದ್ಧತಿ, ಸಾಮಾನ್ಯ ತಿಳುವಳಿಕೆಯ ಕ್ವಿಜ್ ಧ್ವಜಾರೋಹಣ ವಿಧಿ, ಸ್ಕೌಟಿಂಗ್ ಮತ್ತು ಸಮುದಾಯದ ಪಾತ್ರ ತಂಡ ಸಭೆ, ಕಂಪನಿ, ಸಭೆ, ಪ್ಯಾಕ್ ಸಭೆ ಮತ್ತು ಪ್ಲಾಕ್ ಸಭೆ ನಡೆಸುವ ವಿಧಾನ ಎಡಗೈ ಹಸ್ತಲಾಘವದ ಮಹತ್ವ, ರಾಷ್ಟ್ರಪತಿ ಸ್ಕೌಟ್ ಗೈಡ್ ಪರೀಕ್ಷಾ ಶಿಬಿರಗಳ ವಿಧಾನ, ವಯಸ್ಕ ನಾಯಕರನ್ನು ನಿರ್ವಹಿಸುವ ವಿಧಾನ, ಪ್ರಿ ಎ ಎಲ್ ಟಿ ಮತ್ತು ಸ್ಕೀಂ ಅಫ್ ಟ್ರೈನಿಂಗ್ ಬಗ್ಗೆ ಮಾಹಿತಿ, ಬಿ. ಪಿ. ವ್ಯಾಯಾಮಗಳು, ಕರ್ತವ್ಯ ಬದಲಾವಣೆ, ಪರೀವೀಕ್ಷಣೆ ಬಗ್ಗೆ ಕಾರ್ಯಾಗಾರ, ಕಬ್ ಮತ್ತು ಬುಲ್‌ಬುಲ್ ಉತ್ಸವ, ರಾಜ್ಯ ಜಾಂಬೂರೇಟ್ ಬಗ್ಗೆ ಚಟುವಟಿಕೆಗಳ ಚರ್ಚೆ, ಮಾಡ್ಯೂಲರ್ ತರಬೇತಿಯ ಬಗ್ಗೆ ಚರ್ಚೆ, ಪದಕ ಪದ್ಧತಿ, ಸರ್ವ ಧರ್ಮಪ್ರಾರ್ಥನೆ,



ಸಮಾವೇಶದಲ್ಲಿ ಪಾಲ್ಗೊಂಡ
ವೃಕ್ಷಮಣಿದಾರಕರು

ನಾಯಕರು ತಮ್ಮ ಜವಾಬ್ದಾರಿಯಲ್ಲಿ ವಿಫಲರಾಗಲು ಕಾರಣಗಳು ಮುಂತಾದ ಅನೇಕ ವಿಷಯಗಳ ಬಗ್ಗೆ ಸಂಪನೂಲ್ಮ ವ್ಯಕ್ತಿಗಳು ಚರ್ಚಿಸಿದರು. ಅಭ್ಯರ್ಥಿಗಳು ಪ್ರತಿ ದಿನ ಬೆಳಿಗ್ಗೆ 7.30 ರಿಂದ ರಾತ್ರಿಯ 11 ಗಂಟೆಯವರೆವಿಗೂ ಬಿಡುವಿಲ್ಲದೆ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಎಲ್ಲರ ಪ್ರಶಂಸೆಗಳಿಗೆ ಪಾತ್ರರಾಗಿರುತ್ತಾರೆ.

29-11-2002 ರಂದು ನಡೆದ ಶಿಬಿರಾಗ್ನಿಯೆ ಕಾರ್ಯಕ್ರಮದಲ್ಲಿ ಎಲ್ಲಾ ಅಭ್ಯರ್ಥಿಗಳು ತಮ್ಮ ಜಿಲ್ಲೆಯ ಗುಂಪುಗಳೊಂದಿಗೆ ವೇಷ ಭೂಷಣಗಳೊಂದಿಗೆ



ಭವ್ಯ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ
ವೃಕ್ಷಮಣಿದಾರಕರು

ಅತ್ಯುತ್ತಮ ಕಾರ್ಯಕ್ರಮಗಳನ್ನು ನೀಡಿ ವಿವೇಕಾನಂದ ಕೇಂದ್ರದ ಎಲ್ಲಾ ಜನರ ಮೆಚ್ಚುಗೆ ಪಾತ್ರರಾಗಿರುತ್ತಾರೆ.

30-11-2002 ರಂದು ನಡೆದ ವ್ಯವಹಾರಿಕ ಸಭೆಯಲ್ಲಿ 20 ಸ್ಕೌಟರ್ಸ್ ಮತ್ತು 5 ಗೈಡರ್ಸ್ ಗಳಿಗೆ ಹಿಮಾಲಯ ಪುಡ್ ಬ್ಯಾಡ್ಜ್ ಪದಕಗಳನ್ನು ನೀಡಿ ಗೌರವಿಸಲಾಯಿತು. ಐದು ಮಂದಿ ರಾಜ್ಯ ಪ್ರಶಸ್ತಿ ಶಿಕ್ಷಕರು, 13 ಮಂದಿ ಜಿಲ್ಲಾ ಪ್ರಶಸ್ತಿ ಶಿಕ್ಷಕರು ಮತ್ತು 27 ಮಂದಿ ಜನ ಮೆಚ್ಚಿದ ಶಿಕ್ಷಕ ಶಿಕ್ಷಕಿಯರನ್ನು ಸನ್ಮಾನಿಸಲಾಯ್ತು. ರಾಜ್ಯ ಸಂಘಟನಾ ಆಯುಕ್ತರಾಗಿ ನಿವೃತ್ತಿ ಹೊಂದಲಿರುವ ಶ್ರೀ ಕೆ. ತಿಮ್ಮಪ್ಪರವರನ್ನು ಹೃದಯ ಪೂರ್ವಕವಾಗಿ ಸನ್ಮಾನಿಸಲಾಯ್ತು. ಇದೇ ಸಂದರ್ಭದಲ್ಲಿ ಕನ್ಯಾಕುಮಾರಿ ಶೈಕ್ಷಣಿಕ ಜಿಲ್ಲೆಯ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಚಲ್ಲಪ್ಪನ್ ಅವರು ನೀಡಿದ ಸೇವೆಗೆ ಸಮಾವೇಶದಲ್ಲಿ ಸನ್ಮಾನಿಸಲಾಯ್ತು.



ಸಮಾವೇಶದಲ್ಲಿ ಪಾಲ್ಗೊಂಡ
ವೃಕ್ಷಮಣಿದಾರಕರು

30-11-2002 ರಂದು ಮದ್ಯಾಹ್ನ ಕೇಂದ್ರದ ವಿಶೇಷ ವಾಹನಗಳಲ್ಲಿ ತಮಿಳುನಾಡಿನ ಪ್ರಖ್ಯಾತ ಕವಿ ಶ್ರೀ ತಿರುವಳ್ಳೂವರ್ ಮತ್ತು ಶ್ರೀ ಸ್ವಾಮಿ ವಿವೇಕಾನಂದ ಸ್ಮಾರಕಗಳನ್ನು ವೀಕ್ಷಿಸಲು ತೆರಳಿದರು. ಸ್ಮಾರಕಗಳನ್ನು ವೀಕ್ಷಿಸಿ ಕನ್ಯಾಕುಮಾರಿಮ್ಮನವರ ದರ್ಶನವನ್ನು ಪಡೆದು ಸಂಗಮದಲ್ಲಿ ಸ್ನಾನ ಮಾಡಿ ಗಾಂಧಿ ಮ್ಯೂಜಿಯಂನ್ನು ನೋಡಿ ಸೂರ್ಯಾಸ್ತಮವನ್ನು ವೀಕ್ಷಿಸಿದರು.



ಭವ್ಯ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ
ವೃಕ್ಷಮಣಿದಾರಕರು




ಭವ್ಯ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ
ವೃಕ್ಷಮಣಿದಾರಕರು

ದಿನಾಂಕ : 1-12-2002 ರಂದು ಬೆಳಿಗ್ಗೆ ಸುಚೀಂದ್ರಮ್ ತಿರುಚುಂದೂರ್ ಸ್ಥಳಗಳಿಗೆ ಭೇಟಿ ನೀಡಿ ಮಂಡಪಂನಲ್ಲಿ ತಮಿಳುನಾಡು ಪ್ರವಾಸ್ಸೋದ್ಯಮ ಅತಿಥಿ ಗೃಹದಲ್ಲಿ ತಂಗಿದ್ದು, ದಿನಾಂಕ 2.12.2002ರಂದು ರಾಮೇಶ್ವರಂಗೆ ತೆರಳಿ ಸಮುದ್ರ ಸ್ನಾನ ಮತ್ತು ತೀರ್ಥ ಸ್ನಾನಗಳನ್ನು ಮುಗಿಸಿ ರಾಮನಾಥ ಸ್ವಾಮಿಯ ದರ್ಶನ ಪಡೆದರು. ಮೂರು ಗಂಟೆಗೆ ಮಧುರೈ ತಲುಪಿ ಸುದರೇಶ್ವರರ್ ಮತ್ತು ಮೀನಾಕ್ಷಿ ಅಮ್ಮನವರ ದರ್ಶನವನ್ನು ಪಡೆದು ರಾತ್ರಿ 12 ಗಂಟೆಗೆ ಕನ್ಯಾಕುಮಾರಿ ತಲುಪಿ ವಿಶ್ರಾಂತಿ ಪಡೆದರು.

ರಾಜ್ಯ ಉಪಾಧ್ಯಕ್ಷರಾದ ಶ್ರೀ ಆರ್. ವೆಂಕಣ್ಣ, ರಾಜ್ಯ ಜಂಟೀ ಕಾರ್ಯದರ್ಶಿಯಾದ ಶ್ರೀಮತಿ ಎಂ. ಶಾಂತಿಮತಿ, ಶ್ರೀ ಎಂ.ಎ. ಚೆಲ್ಲಯ್ಯ, ಕೇಂದ್ರ ಕಛೇರಿ ಆಯುಕ್ತರು, (ಸಾರ್ವಜನಿಕ ಸಂಪರ್ಕ), ರಾಜ್ಯ ತರಬೇತಿ ಆಯುಕ್ತರುಗಳಾದ ಶ್ರೀ ನಾರಾಯಣ ಶೆಟ್ಟಿ ಮತ್ತು ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಕೆ. ತಿಮ್ಮಪ್ಪ, ಶ್ರೀ ಎನ್. ಶ್ರೀನಿವಾಸನ್, ಎಲ್.ಟಿ.(ಎಸ್), ಸಹಾಯಕ ಕಾರ್ಯದರ್ಶಿ ಶ್ರೀ ಮಾಧವ್ ಸಿಂಗ್, ಶ್ರೀಮತಿ ಕೆ.ಕೆ. ಲೀಲಾ, ಶ್ರೀಮತಿ ಕೆ.ಸಿ. ಪ್ರೇಮಲತ ಇವರೆಲ್ಲರೂ ಸಮಾವೇಶದಲ್ಲಿ ಸಂಪನ್ಮೂಲ ವ್ಯಕ್ತಿಗಳಾಗಿದ್ದರು.

ಶ್ರೀ ಚಿನ್ನಸ್ವಾಮಿ ರೆಡ್ಡಿ, ರಾಜ್ಯ ಕಾರ್ಯದರ್ಶಿ ಮತ್ತು ಸಂಚಾಲಕರು ಎಲ್ಲಾ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಸಂಘಟಿಸಿದರು.



**2003ನೇ ವರ್ಷದ ಹಾರ್ದಿಕ ಶುಭಾಶಯಗಳು**



**ತಮಗೆಲ್ಲರಿಗೂ ಶುಭವಾಗಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.**

**ಕೊಂಡಜ್ಜಿ ಬಿ. ಷಣ್ಮುಖಪ್ಪ**
ರಾಜ್ಯ ಮುಖ್ಯ ಆಯುಕ್ತರು




# STATE LEVEL TRAINING COURES HELD AT BESANT PARK

## *125 Unit Leaders attented*

KS & G NEWS SERVICE

***Besant Park Dec' 12***

*The Bharat Scouts and Guides, Karnataka Guide Wing Organised three Training Courses for Unit Leaders from 7th Dec to 13th Dec' 2002 at the State Training Centre, Besant Park, Doddaballapur.*

***Advanced Course for Guide Captains***

*Smt. Prabha Londe ALT(G) and Miss S.K. Prabha ALT(G) were the Leaders for the Advanced Training Course for Guide Captain. 55 Unit Leaders participated in the Training Course assisted by Smt. Susheela Gopal, ALT(G), Headquarters commissioner (P), Smt. Kumari Honnamma ALT(G) and Smt. Arunamala ALT (G).*

***Himalaya Wood Badge Course***

*Smt. Usha Ramaiah LT(G) was the Leader for the Himalaya Wood Badge Course Part -II. 35 Unit Leaders Participated in the Training Course assisted by Smt. K.K. Leela LT(G), Smt. B.D. Shantha ALT(G) and Smt. Vanajakshamma ALT(G). Miss P. Saroja LT(G) was the Resource Person.*

***Regional Level Pre ALT Course***

*Smt. R. Jaishree, LT(G) and Deputy Director Leader Training (G) National Training Centre, Pachmarhi, MP was the Leader. 35 Unit Leaders Participated in the Training Course assisted by Miss Ravi Wesley LT(G), Smt. Janaki Venugopal LT(G). Sri T.S. Lucas LT(S) Former State Secretary was the Resource Person. 32 Participants were from Karnataka, 2 from Tamilnadu and one from Andhra Pradesh.*

*Mrs. M.G. Bopaiah, State Commissioner (G) Smt M. Shanthimathi, Joint State Secretary(G), Visited the Camp and addressed the Campers.*

*The Valedictory Function was held on 12 th Dec 2002 Sri, Kondajji B. Shanmukhappa, State Chief Commissioner delivered the Valedectory address. Sir M.A. Chelliah, Headquarters Commissioner (Information and Public Relations) attented the Function.*

*Smt. Janaki Venugopal, State Training Commissioner (G) Welcomed the Guests and the Participants. Miss Ravi Wesley, Headquaters Commissioner (Training) Proposed Vote of Thanks.*

# ಸನ್ಮಾನ್ಯ ಮುಖ್ಯಮಂತ್ರಿಗಳ ಅಮೃತ ಹಸ್ತದಿಂದ

# ಬಾಗಲಕೋಟೆ ಜಿಲ್ಲೆಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಆಡಳಿತ ಕಛೇರಿಗೆ ಶಂಕುಸ್ಥಾಪನೆ

**ಕೆಎಸ್‌ಜಿ ವಾರ್ತೆಗಳು**

ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ ಜಿಲ್ಲಾ ಆಡಳಿತ ಮತ್ತು ಬಾಗಲಕೋಟೆ ನಗರಸಭೆ, ಇವುಗಳ ಸಂಯುಕ್ತ ಆಶ್ರಯದಲ್ಲಿ ವಿವಿಧ ಕಾಮಗಾರಿಗಳ ಶಂಕುಸ್ಥಾಪನೆ ಮತ್ತು ಕಟ್ಟಡಗಳ ಉದ್ಘಾಟನಾ ಕಾರ್ಯಕ್ರಮದ ಸಂದರ್ಭಗಳಲ್ಲಿ ಸನ್ಮಾನ್ಯ ಶ್ರೀ ಎಸ್.ಎಂ. ಕೃಷ್ಣ, ಮುಖ್ಯಮಂತ್ರಿಗಳು, ಕರ್ನಾಟಕ ಸರಕಾರ, ಇವರ ಅಮೃತ ಹಸ್ತದಿಂದ, ಬಾಲಗಕೋಟೆ ಜಿಲ್ಲೆಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಆಡಳಿತ ಕಛೇರಿಯ ಶಂಕುಸ್ಥಾಪನೆ ಸಮಾರಂಭವು ದಿನಾಂಕ 17.11.2002 ರಂದು ಸಾಯಂಕಾಲ 5.00 ಗಂಟೆಗೆ ಬಾಗಲಕೋಟೆಯ ನವನಗರದಲ್ಲಿ ವಿಜೃಂಭಣೆಯಿಂದ ನೆರವೇರಿತು.

ಶ್ರೀ ಪಿ.ಎಚ್. ಪೂಜಾರ, ಶಾಸಕರು ಇವರ ಅಧ್ಯಕ್ಷತೆಯಲ್ಲಿ ಈ ಕಾರ್ಯಕ್ರಮ ನೆರವೇರಿತು. ಈ ಸಂದರ್ಭದಲ್ಲಿ ಶ್ರೀ ಎಚ್.ಕೆ. ಪಾಟೀಲ್, ಜಲಸಂಪನ್ಮೂಲ ಸಚಿವರು, ಶ್ರೀ ಆರ್.ಬಿ. ತಿಮ್ಮಾಪೂರ, ಬಾಗಲಕೋಟೆ ಜಿಲ್ಲಾ ಉಸ್ತುವಾರಿ ಸಚಿವರು, ಶ್ರೀ ಆರ್.ಎಸ್ ಪಾಟೀಲ, ಲೋಕಸಭಾ ಸದಸ್ಯರು, ಬಾಗಲಕೋಟೆ, ಶ್ರೀ ಎಸ್.ಆರ್ ಪಾಟೀಲ, ವಿಧಾನ ಪರಿಷತ್ ಸದಸ್ಯರು, ಬಾಗಲಕೋಟೆ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಅಧ್ಯಕ್ಷರು, ಶ್ರೀ ಎಂ.ಪಿ. ನಾಡಗೌಡ, ವಿಧಾನ ಪರಿಷತ್ ಸದಸ್ಯರು, ಬಾಗಲಕೋಟೆ, ಶ್ರೀ ಜಿ.ಎನ್. ಪಾಟೀಲ, ಅಧ್ಯಕ್ಷರು, ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ ಹಾಗೂ ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಬಾಗಲಕೋಟೆ ಇವರುಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದರು.

ಶ್ರೀ ಗಂಗಾರಾಮ ಬಡೇರಿಯಾ, ಜಿಲ್ಲಾಧಿಕಾರಿಗಳು, ಬಾಗಲಕೋಟೆ, ಶ್ರೀ ಎಸ್.ಎಂ. ಜಾಮದಾರ, ಆಯುಕ್ತರು, ಪು.ವ.ಮತ್ತು ಪು.ನಿ. ಮತ್ತು ಶ್ರೀಮತಿ ಮುಮ್ತಾಜ ಬೇಗಂ ಸೌದಾಗರ, ಅಧ್ಯಕ್ಷರು, ನಗರಸಭೆ, ಬಾಗಲಕೋಟೆ ಇವರುಗಳು ಈ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಮಾನ್ಯ ಮುಖ್ಯಮಂತ್ರಿಗಳು, ಮಂತ್ರಿಗಳು, ಶಾಸಕರುಗಳು, ವಿವಿಧ ನಿಗಮದ ಅಧ್ಯಕ್ಷರು, ಜಿಲ್ಲಾ ಪಂಚಾಯತ್ ಸದಸ್ಯರುಗಳು, ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ಸ್ಕಾರ್ಫ್ ಮತ್ತು ಮಾಲಾರ್ಪಣೆಯನ್ನು ಮಾಡಿ ಸನ್ಮಾನಿಸಲಾಯಿತು.

ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಬಿ.ಟಿ. ಸತ್ಯನಾರಾಯಣ ರೆಡ್ಡಿ, ಜಿಲ್ಲಾ ಆಯುಕ್ತರು ಸ್ಕೌಟ್ಸ್ ಶ್ರೀ ಸಿ.ಜಿ. ರಾಥೋಡ್, ಜಿಲ್ಲಾ ಆಯುಕ್ತರು ಗೈಡ್ಸ್ ಶ್ರೀಮತಿ ಎಂ.ಆರ್. ಗುಡಿಗಣ್ಣನವರು, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಜಿ.ಬಿ. ಇದ್ದಲಗಿ ಹಾಗೂ ಜಿಲ್ಲಾ ಜಂಟಿ ಕಾರ್ಯದರ್ಶಿಗಳಾದ ಶ್ರೀ ಸಿ.ಎ. ಸಾವಳಗಿ ಮತ್ತು ಇತರ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಹಾಜರಿದ್ದರು.

# ಜಿಲ್ಲಾ ವಾರ್ತೆಗಳು

ದಕ್ಷಿಣ ಕನ್ನಡ ಜಿಲ್ಲೆ



ಭಾರತ್ ಸ್ಕೌಟ್ ಮತ್ತು ಗೈಡ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ವಿಶಿಷ್ಟ ಸಾಧನೆಗೆ ಕಾರಣ ಕರ್ತರಾದ ಶ್ರೀ. ಐ.ಎ. ಕೈರನ್ನ ರವರಿಗೆ ರಾಷ್ಟ್ರೀಯ ಸಂಸ್ಥೆಯು ಬೆಳ್ಳಿ ಆನೆ ಪದಕವನ್ನಿತ್ತು ಗೌರವಿಸಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ಕೀರ್ತಿಯನ್ನು ಸ್ಕೌಟ್ಸ್-ಗೈಡ್ಸ್‌ನ ಮೂಲಕ ರಾಷ್ಟ್ರಮಟ್ಟದಲ್ಲಿ ಉತ್ತುಂಗಕ್ಕೇರಿಸಿದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ಎ. ಕೈರನ್ನರವರನ್ನು ಕನ್ನಡ ರಾಜ್ಯೋತ್ಸವದ ದಿನದಂದು ಜಿಲ್ಲಾಡಳಿತದ ಪರವಾಗಿ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಬಿ. ರಮಾನಾಥರೈಯುವರು ಸನ್ಮಾನಿಸಿದರು. ಜಿಲ್ಲಾಧಿಕಾರಿ ಶ್ರೀ ಕೆ.ಎ. ಮೊಣ್ಣಪ್ಪ ಮತ್ತಿತರ ಗಣ್ಯರುಗಳನ್ನು ಕಾಣಬಹುದು.



ಕನ್ನಡ ರಾಜ್ಯೋತ್ಸವ ಸಂದರ್ಭದಲ್ಲಿ ಜಿಲ್ಲಾ ಮಟ್ಟದ ಪಥ ಸಂಚಲನ ಕಾರ್ಯಕ್ರಮದಲ್ಲಿ ಹಲವಾರು ವಿಭಾಗಗಳು ಭಾಗವಹಿಸಿದ್ದು ಸ್ಕೌಟ್ - ಗೈಡ್ಸ್‌ಗಳು ಆಕರ್ಷಣೀಯ ಪಥಸಂಚಲನವನ್ನು ನಡೆಸಿ ಎಲ್ಲರ ಪ್ರಶಂಸೆಗೆ ಪಾತ್ರವಾಯಿತು. ಅಲ್ಲದೆ ಮಂಗಳೂರಿನ ಅಗ್ನೇಸ್ ಪ್ರೌಢಶಾಲೆಯ ಗೈಡ್ ದಳವು ಅತ್ಯುತ್ತಮ ಪಥಸಂಚಲನ ಪ್ರಶಸ್ತಿಯನ್ನು ಪಡಕೊಂಡಿತು. ಸ್ವಾತಂತ್ರೋತ್ಸವದ ಸಂದರ್ಭದಲ್ಲಿ ಇದೇ ತಂಡ ಪ್ರಥಮ ಪ್ರಶಸ್ತಿಯನ್ನು ಪಡೆದಿದೆ. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಐ.ಎ. ಕೈರನ್ನು ಹಾಗೂ ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಐರಿನ್ ಡಿಕುನ್ಹ ಚಿತ್ರದಲ್ಲಿದ್ದಾರೆ.

## ಬೆಂಗಳೂರು ಗ್ರಾಮಾಂತರ ಜಿಲ್ಲೆ

### ರಾಜಭವನದಲ್ಲಿ
### ಪ್ರಗತಿ ವಿದ್ಯಾ ನಿಕೇತನ ಮಕ್ಕಳು

ಪ್ರಗತಿ ವಿದ್ಯಾ ನಿಕೇತನ, ಹಾರೋಹಳ್ಳಿ, ಕನಕಪುರ ತಾಲ್ಲೂಕು, ಶಾಲೆಯ ಕಬ್ಸ್ ಮತ್ತು ಬುಲ್ ಬುಲ್ಸ್‌ಗಳ ತಂಡವು ದಿನಾಂಕ 7-11-02 ರಂದು ರಾಜಭವನದಲ್ಲಿ ನಡೆದ ಸಮಾರಂಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಶಿವನಂಜಪ್ಪನವರ ನೇತೃತ್ವದಲ್ಲಿ ಶಾಲಾ ಮುಖ್ಯ ಶಿಕ್ಷಕಿ ಹಾಗೂ ಪ್ಲಾಕ್ ಲೀಡರ್ ವೈ. ಲಕ್ಷ್ಮೀ ಹಾಗೂ ಲೇಡಿ ಕಬ್ ಮಾಸ್ಟರ್ ಕು।। ರೇಖಾ ಕೆ.ಎಂ. ರವರ ಮಾರ್ಗದರ್ಶನದಲ್ಲಿ ಉತ್ತಮ ಜಾನಪದ ನೃತ್ಯವನ್ನು ನೀಡಿ ರಾಜ್ಯಪಾಲರ ಪ್ರಶಂಸೆಗೆ ಕಾರಣರಾಗಿರುತ್ತಾರೆ.

## ಹಾವೇರಿ ಜಿಲ್ಲೆ

### ಮೂಲ ತರಬೇತಿ ಶಿಬಿರಗಳು

ದಿನಾಂಕ : 15-11-02 ರಿಂದ 24-11-02 ರ ವರೆಗೆ ಹಾನಗಲ್ಲ ತಾಲೂಕ ಸ್ಕೌಟ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ಸ್ ಮೂಲ ತರಬೇತಿ ಶಿಬಿರವು ಮಹಿಳಾ ಪಿ.ಯು. ಕಾಲೇಜು ಹಾಗೂ ಚನ್ನವೀರೇಶ್ವರ ಕಲ್ಯಾಣ ಮಂಟಪ ಅಕ್ಕಿಆಲೂರ ತಾಲ್ಲೂಕು ಹಾನಗಲ್ಲನಲ್ಲಿ ನಡೆಯಿತು.

ತರಬೇತಿಯಲ್ಲಿ 42 ಜನ ಸ್ಕೌಟ್ ಮಾಸ್ಟರ್ಸ್ 20 ಗೈಡ್ ಕ್ಯಾಪ್ಟನ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಒಂದು ಗುಂಪಿಗೆ ಶ್ರೀ ಡಿ. ಬಸವರಾಜ, ಮತ್ತು ಶ್ರೀ ಎಂ.ಆರ್. ಪಾಟೀಲರು, ಶ್ರೀಮತಿ ಉಮಾ ಮರಿಗೆಂಚಣ್ಣನವರು ಕಾರ್ಯನಿರ್ವಹಿಸಿದರು.

ದಿನಾಂಕ : 15-11-02 ರಂದು ಉದ್ಘಾಟನಾ ಸಮಾರಂಭಕ್ಕೆ ಶ್ರೀ ಪ್ರಭಾಕರ್ ರಾವ್ ಮಂಗಳೂರ ಜಿಲ್ಲಾ ಮುಖ್ಯ ಆಯುಕ್ತರು, ಹಾವೇರಿ ಶ್ರೀಮತಿ ಮಾಧುರಿ ದೇವಧರ ಜಿಲ್ಲಾ ಆಯುಕ್ತರು (ಗೈಡ್) ಶ್ರೀ ನಿರಂಜಣ್ಣ ಪಾವಲಿ ಶ್ರೀ ಚನ್ನಬಸಪ್ಪ ತುಪ್ಪರ ಶ್ರೀ ಉದಯ ವೀರಪ್ಪಣ್ಣನವರು ಆಗಮಿಸಿದ್ದರು.

23-11-02 ರಂದು ಮುಕ್ತಾಯ ಸಮಾರಂಭದಲ್ಲಿ ಶ್ರೀ ನಿರಂಜಣ್ಣ ಪಾವಲಿ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಎಸ್.ಎಂ. ಸಿರದೂರ, ಶ್ರೀ ಪುರದ, ಶ್ರೀ ಬೆಲ್ಲದ, ಶ್ರೀ ಎನ್.ಆರ್. ಕಳ್ಳಿಮನಿ ಜಿ.ಇ.ಓ. ಹಾನಗಲ್ ಹಾಜರಿದ್ದರು. ಶ್ರೀ ಜಿ. ಪರಮಶಿವಪ್ಪ ಬಿ.ಇ.ಓ. ಹಾನಗಲ್ಲ ಸಂದರ್ಶನ ನೀಡಿದರು. ರಾಜ್ಯ ಸಂಸ್ಥೆಯಿಂದ ಶ್ರೀ ನಾರಾಯಣಶೆಟ್ಟಿ ಎಸ್.ಟಿ.ಸಿ. (ಎಸ್) ಅವರು ಸಂದರ್ಶನ ನೀಡಿದರು. ಡಾ।। ಈಶ್ವರ, ಮಾಳೊದೆ ಶ್ರೀಮತಿ ಶೈಲಕ್ಕ, ಶ್ರೀ ಉಮಾಪತಿ ಪ್ರಾಚಾರ್ಯರು ಮಹಿಳಾ ಪಿ.ಯು. ಕಾಲೇಜು ಅಕ್ಕಿಆಲೂರ್ ಶ್ರೀ ಪಿ.ಆರ್. ಮಠದ ಖಜಾಂಜಿ ಬಿ.ಎಸ್.ಜಿ. ಹಾಗೂ ಊರ ನಾಗರಿಕರು ಪ್ರತಿದಿನ ಭೇಟಿ ನೀಡಿ ಸಲಹೆ ಮಾಡುತ್ತಿದ್ದರು ಶಿಬಿರಾರ್ಥಿಗಳು ತಮ್ಮ ಅನಿಸಿಕೆ ವಿವರಿಸಿದರು.

## ಚಿಕ್ಕಮಗಳೂರು ಜಿಲ್ಲೆ

### ಸ್ಕೌಟ್ / ಗೈಡ್ ಸಪ್ತಾಹ ಹಾಗೂ ಮೇಳ

ದಿನಾಂಕ 14-11-02 ರಂದು ಪ್ರಾರಂಭವಾದ ಈ ಸಪ್ತಾಹ ಹಾಗೂ ಮೇಳದಲ್ಲಿ ಮಕ್ಕಳ ವಿವಿಧ ಕಾರ್ಯ ಚಟುವಟಿಕೆಗಳಾದ ಚಿತ್ರಕಲಾ ಸ್ಪರ್ಧೆ, ದೇಶಭಕ್ತಿ ಗೀತೆ, ಸ್ಕಿಟ್, ಕ್ವಿಜ್ ಹಾಗೂ ಪೇಪರ್ ಕ್ರಾಫ್ಟ್ ಹಾಗೂ ಆಕರ್ಷಕ ಸ್ಕೌಟ್ / ಗೈಡ್ಸ್‌ಗಳ ಜಾಥಾದಲ್ಲಿ ಸಾಕ್ಷರತೆ, ಮದ್ಯಪಾನ ನಿಶೇದ, ಗ್ರಾಮ ನೈರ್ಮಲ್ಯ ಮತ್ತು ಸ್ವಚ್ಛತೆ, ಸಾಮೂಹಿಕ ಪಿಡುಗುಗಳ ವಿರುದ್ಧ, ಪ್ಲಾಸ್ಟಿಕ್‌ನಿಂದ ಆಗುವ ಹಾನಿ ಹಾಗೂ ಅದರಿಂದ ಜನ ಜಾನುವಾರುಗಳಿಗೆ ಆಗುವ ನಷ್ಟ, ಮಧ್ಯದಲ್ಲಿಯೇ ಶಾಲೆ ಬಿಡುವ ಮಕ್ಕಳಿಗೆ ಶಾಲೆಗೆ ಸೇರುವಂತೆ ಅದ್ಭುತ ಘೋಷಣೆಗಳನ್ನು ಈ ಜಾಥಾದಲ್ಲಿ ಜಯಕಾರದೊಂದಿಗೆ ಜನರಲ್ಲಿ ಜನಜಾಗೃತಿ ಕಹಳೆ ಊದಲಾಯಿತು.

ದಿನಾಂಕ : 20-11-02 ರ ಬೆಳಿಗ್ಗೆ ಧ್ವಜಾರೋಹಣದ ನಂತರ ನಡೆದ ಜಾಥಾವನ್ನು ಸ.ಪ.ಪೂ. ಕಾಲೇಜಿನ ಪ್ರಾಂಶುಪಾಲರಾದ ಶ್ರೀ ವಿಶ್ವನಾಥರಾವ್‌ರವರು ಹಸಿರು ನಿಶಾನೆ ತೋರಿಸುವ ಮೂಲಕ ಉದ್ಘಾಟಿಸಿದರು. ಈ ಜಾಥಾದಲ್ಲಿ ಸ್ಕೌಟ್ ಬ್ಯಾಂಡ್ ಕ್ರಮಬದ್ಧವಾಗಿ ಮೊಳಗಿ ಎಲ್ಲರನ್ನೂ ಈ ಜಾಥಾ ಆಕರ್ಷಿಸಿತು.

ಈ ಸಮಾರಂಭದ ಸಮಾರೋಪ ಸಮಾರಂಭವು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಹಾಗೂ ಈ ಸ್ಕೌಟ್ ಸಂಸ್ಥೆಯ ಕಾರ್ಯಾಧ್ಯಕ್ಷರಾದ ಶ್ರೀ ಪ್ರಭುಸ್ವಾಮಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಮೇಳದ ವ್ಯವಸ್ಥಾಪಕರಾದ ಶ್ರೀ ಎ. ಲಕ್ಷಣ ದಾಸ್‌ಎ.ಎಲ್.ಟಿ. (ಸ್ಕೌಟ್ಸ್) ಸ್ವಾಗತಿಸಿದರೆ ಶ್ರೀಮತಿ ನಾಗಲಕ್ಷ್ಮಿ ಸಹಕಾರ್ಯದರ್ಶಿನಿ ಇವರು ವರದಿ ವಾಚನ ಮಾಡಿದರು. ಶ್ರೀಯುತ ಲೋಕೇಶ್ ಎ.ಎಸ್.ಓ.ಸಿ. (ಸ್ಕೌಟ್ಸ್), ಶ್ರೀ ವಿಶ್ವನಾಥರಾವ್ ಪ್ರಾಂಶುಪಾಲರು, ಸ.ಪ.ಪೂ. ಕಾಲೇಜು, ಜೇಸೀ ನೂತನ ಅಧ್ಯಕ್ಷ ಶ್ರೀಮಂದರ, ಶ್ರೀ ಬಸವರಾಜಪ್ಪ ಸ್ಕೌಟ್ ಕಾರ್ಯದರ್ಶಿ ಇವರು ಭಾಗವಹಿಸಿದ್ದರು. ಮೇಳದಲ್ಲಿ ಭಾಗವಹಿಸಿದವರಿ ಗೆಲ್ಲರಿಗೂ ಪ್ರಶಸ್ತಿ ಪತ್ರ ನೀಡಲಾಯ್ತು. ಸ್ಕೌಟ್ / ಗೈಡ್ಸ್‌ಗಳಿಂದ ನಡೆದ ಸಾಂಸ್ಕೃತಿಕ ಕಾರ್ಯಕ್ರಮಗಳೂ ಪ್ರಶಂಸನೀಯವಾಗಿತ್ತು. ಈ ಮೇಳದಲ್ಲಿ ಶೃಂಗೇರಿಯ ಸ.ಪ.ಪೂ. ಕಾಲೇಜಿನ ಸ್ಕೌಟ್ಸ್ / ಗೈಡ್ಸ್‌ಗಳು, ಶ್ರೀ ಜ.ಆ.ವಿ. ಬಾಲಿಕಾ ಪ್ರೌಢಶಾಲೆಯ ಗೈಡ್ಸ್‌ಗಳು, ವಿದ್ಯಾಸಂಸ್ಥೆಯ ಸ್ಕೌಟ್ಸ್ / ಗೈಡ್ಸ್‌ಗಳು ನಾಯಕತ್ವದಲ್ಲಿ ಮಕ್ಕಳು ಅದ್ಭುತವಾಗಿ ಭಾಗವಹಿಸಿ ಸಂತೋಷ ಪಟ್ಟರು. ಮೇಳದಲ್ಲಿ ಮಧ್ಯಾಹ್ನದ ಊಟದ ವ್ಯವಸ್ಥೆ ಶ್ರೀಮಠ, ಶೃಂಗೇರಿ ಇವರ ಸಹಕಾರದೊಂದಿಗೆ ಯಶಸ್ವಿಯಾಯಿತು. ಈ ಎಲ್ಲಾ ಕಾರ್ಯಕ್ರಮ ಜೇಸೀ ಸಂಸ್ಥೆಯ ಸಹಭಾಗಿತ್ವದಲ್ಲಿ ನಡೆದು ಶಿಬಿರ ಯಶಸ್ವಿಯಾಗಿ ನಡೆಯಿತು. ತಾಲ್ಲೂಕಿನ ಎಲ್ಲಾ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳು ಮೇಳದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಶಿಬಿರವನ್ನು ಯಶಸ್ವಿಗೊಳಿಸಿದರು.

**ಬೀರೂರಿನಲ್ಲಿ ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್ ಬುಲ್ಸ್ ರ‍್ಯಾಲಿ ಉದ್ಘಾಟನಾ ಸಮಾರಂಭ**

ದಿನಾಂಕ : 27-11-02 ರಂದು ಬುಧವಾರ ಬೆಳಿಗ್ಗೆ 10.30 ರಿಂದ ಕಡೂರು, ತರೀಕೆರೆ ತಾಲ್ಲೂಕು ಮತ್ತು ಬೀರೂರು ವಲಯದ ಸ್ಕೌಟ್ಸ್, ಗೈಡ್ಸ್ ಕಬ್ಸ್ ಮತ್ತು ಬುಲ್ ಬುಲ್ಸ್‌ಗಳ ಮೇಳವನ್ನು ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ, ಬೀರೂರು ವತಿಯಿಂದ ಶ್ರೀ ಪತ್ರೆ ಕೆ. ಚನ್ನವೀರಪ್ಪಯ್ಯ ಕಲ್ಯಾಣ ಮಂದಿರ ಬೀರೂರಿನಲ್ಲಿ ಏರ್ಪಡಿಸಲಾಗಿತ್ತು. ರ‍್ಯಾಲಿಯ ಉದ್ಘಾಟನೆಯನ್ನು ಶ್ರೀ ಕೆ.ಬಿ. ಮಲ್ಲಿಕಾರ್ಜುನ್, ಶಾಸಕರು, ಬೀರೂರು ಕ್ಷೇತ್ರ ಇವರು ದೀಪ ಬೆಳಗಿಸುವುದರ ಮೂಲಕ ನೆರವೇರಿಸಿ, ಸ್ಕೌಟ್ಸ್ ಗೈಡ್ಸ್ ಮಕ್ಕಳು ದೇಶಭಕ್ತಿ,. ಶಿಸ್ತು, ಸೇವಾ ಮನೋಭಾವನ ಬೆಳೆಸುವುದರ ಮುಖಾಂತರ ಸಮಾಜಕ್ಕೆ ಹಾಗೂ ಸಾರ್ವಜನಿಕ ಆಸ್ತಿಗಳನ್ನು ರಕ್ಷಿಸಬೇಕೆಂದು ಮತ್ತು ಮಕ್ಕಳ



ಮೇಳದ ಉದ್ಘಾಟನಾ ಕಾರ್ಯಕ್ರಮದಲ್ಲಿ ಶ್ರೀ ಕೆ.ಬಿ. ಮಲ್ಲಿಕಾರ್ಜುನ್, ಶಾಸಕರು, ಬೀರೂರು, ಶ್ರೀ ಸೋಮಶೇಖರಯ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಬೀರೂರು ಶ್ರೀ ನಾಗರಾಜ್ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಕಡೂರು ಇವರನ್ನು ಚಿತ್ರದಲ್ಲಿ ಕಾಣಬಹುದು.

ವನವನ್ನು ಸ್ಕೌಟ್ಸ್ ಗೈಡ್ಸ್‌ಗಳು ಶ್ರಮದಾನ ಮಾಡುವ ಮೂಲಕ ಉತ್ತಮ ಪಡಿಸಬೇಕೆಂದು ತಿಳಿಸಿದರು. ಶ್ರೀ ಅರೇಕಲ್ ಎಸ್. ಚಂದ್ರಶೇಖರ್‌ರವರು ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿ ಸ್ಕೌಟ್ಸ್, ಗೈಡ್ಸ್‌ಗಳು ವಾರಕ್ಕೆ ಒಮ್ಮೆ ಶಾಲೆಗಳಲ್ಲಿ ಸ್ಕೌಟ್ಸ್, ಗೈಡ್ಸ್, ಚಟುವಟಿಕೆಗಳಲ್ಲಿ ತೊಡಗಿ ಸಾರ್ವಜನಿಕ ಪಾರ್ಕ್, ಗಿಡಗಳಿಗೆ ನೀರು ಹಾಕುವುದು, ಶಾಲಾ ವನ, ಆಸ್ಪತ್ರೆ ಮುಂತಾದ ಸಾರ್ವಜನಿಕ ಸ್ವತ್ತನ್ನು ರಕ್ಷಿಸಿ, ನಿರ್ವಹಿಸಬೇಕೆಂದು ಕರೆ ನೀಡಿದರು ಮತ್ತು ಮೇಳಕ್ಕೆ ಶುಭ ಹಾರೈಸಿದರು. ಸಮಾರಂಭದಲ್ಲಿ ಬೀರೂರು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಸೋಮಶೇಖಯ್ಯ ರವರು ಮಾತನಾಡಿ ಸ್ಕೌಟ್ ಸಂಸ್ಥಾಪಕರನ್ನು ಪರಿಚಯಿಸಿ, ಸ್ಕೌಟ್ ಸಂಸ್ಥೆಯ ಧ್ಯೇಯ ಉದ್ದೇಶ ಹಾಗೂ ನಿಯಮಗಳನ್ನು ಪ್ರಶಂಶಿಸಿ ಮಕ್ಕಳು ಜೀವನದಲ್ಲಿ

ಇವುಗಳನ್ನು ಆಳವಡಿಸಿಕೊಂಡು ಬರುವಂತೆ ಕರೆ ನೀಡಿದರು. ಮತ್ತು ಬೀರೂರು ವಲಯದ ಎಲ್ಲಾ ಶಾಲೆಗಳಲ್ಲಿ ಸ್ಕೌಟ್ಸ್ - ಗೈಡ್ಸ್ ಘಟಕಗಳು ಚಟುವಟಿಕೆಗಳು ನಡೆಯುವಂತೆ ಶ್ರಮಿಸುವುದಾಗಿ ತಿಳಿಸಿದರು. ಶ್ರೀ ಎಸ್. ನಾಗರಾಜಪ್ಪ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಕಡೂರು ಇವರು ಸಮಾರಂಭದಲ್ಲಿ ಅತಿಥಿಗಳಾಗಿ ಆಗಮಿಸಿ ಸ್ಕೌಟ್ - ಗೈಡ್ ಸಂಸ್ಥೆಯ ಮಕ್ಕಳಲ್ಲಿ ಚಿಕ್ಕಂದಿನಿಂದಲೇ ಒಳ್ಳೆಯ ನಾಗರೀಕರನ್ನಾಗಿ




ಸ್ಕೌಟ್‌ಗಳಿಂದ ಕೋಲಾಟ

ತಯಾರು ಮಾಡುವಲ್ಲಿ ಸಹಕಾರ ಮನೋಭಾವನೆ, ವಿಶ್ವ ಭ್ರಾತೃತ್ವ ರಾಷ್ಟ್ರೀಯ ಬಾವೈಕ್ಯತಾ ಉತ್ತಮ ಸಮಾಜವನ್ನು ನಿರ್ಮಿಸುವಲ್ಲಿ ಮಹತ್ತರವಾದ ಕಾರ್ಯವನ್ನು ಮಾಡುತ್ತಿದೆ. ಸ್ಕೌಟ್ಸ್ - ಗೈಡ್ಸ್ ಸಂಸ್ಥೆಯು ಚಟುವಟಿಕೆಗಳನ್ನು ಎಲ್ಲಾ ಶಾಲೆಗಳಲ್ಲಿ ಪ್ರಾರಂಭಿಸಲು ಶ್ರಮಿಸುವುದಾಗಿ ತಿಳಿಸಿದರು.

ಶ್ರೀ ಪಿ.ಜಿ. ಚಂದ್ರಪ್ಪ, ಎಸ್.ಜೆ.ಎಂ. ಶಾಲೆಯ ಮುಖ್ಯೋಪಧ್ಯಾಯರು ಮಾತನಾಡಿ ಮಕ್ಕಳು ಸ್ಕೌಟ್ಸ್ - ಗೈಡ್ಸ್ ತತ್ವಗಳು ಸೇವಾ ಮನೋಭಾವನೆ ಬೆಳಸಿ ಕೊಳ್ಳುವಂತೆ ಕರೆ ನೀಡಿದರು. ಸಮಾರಂಭದಲ್ಲಿ ಶ್ರೀಮತಿ ಸುಮಿತ್ರಮ್ಮ ನಾಗರಾಜ ಶ್ರೇಷ್ಠಿ, ಶ್ರೀಮತಿ ಸ್ವರ್ಣ ಗುರನಾಥ, ಶ್ರೀಮತಿ ಪತ್ರೆ ಶೈಲಜಾ ಸದಾಶಿವನ್ ಸಹಾಯಕ ಜಿಲ್ಲಾ ಆಯುಕ್ತರುಗಳು ಉಪಸ್ಥಿತರಿದ್ದು ಸ್ಕೌಟ್ಸ್ - ಗೈಡ್ಸ್‌ಗಳಿಗೆ ಶುಭ ಹಾರೈಸಿದರು. ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ಸಹಾಯಕ ಸಂಘಟನಾ ಆಯುಕ್ತರ (ಸ್ಕೌಟ್ಸ್) ಕಾರ್ಯಕ್ರಮ ನಿರೂಪಿಸಿದರು. ಶ್ರೀ ಸಿಸಿ. ಕುಮಾರ್ ಕಾರ್ಯದರ್ಶಿ, ಸ್ಥಳೀಯ ಸಂಸ್ಥೆ, ಬೀರೂರು ಇವರು ಸ್ವಾಗತ ಕೋರಿದರು. ಶ್ರೀ ಎಂ. ಮಲ್ಲಪ್ಪ, ಕ್ರೀಡಾ ಸಂಯೋಜಕರು ಬೀರೂರು ಎಲ್ಲರಿಗೂ ವಂದನಾರ್ಪಣೆ ಸಲ್ಲಿಸಿದರು.

## ಉಡುಪಿ ಜಿಲ್ಲೆ

### ಸ್ಥಳೀಯ ಸಂಸ್ಥೆ ಸ್ಕೌಟ್ ಗೈಡ್ಸ್ ಮೇಳ

ದಿನಾಂಕ : ಡಿಸೆಂಬರ್ 14 ಮತ್ತು 15 ರಂದು ಆಂಗ್ಲ ಮಾಧ್ಯಮ ಶಾಲೆ ಕುಂಜಿಬೆಟ್ಟವಿನಲ್ಲಿ ಉಡುಪಿ ತಾಲ್ಲೂಕು ಸ್ಕೌಟ್ಸ್ ಮತ್ತು ಗೈಡ್ಸ್ ಮೇಳ ನಡೆಯಿತು ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.

## ಶಿವಮೊಗ್ಗ ಜಿಲ್ಲೆ

### ಸ್ಕೌಟ್ ಗೈಡ್ ಮಕ್ಕಳಿಂದ ಸಾಂಸ್ಕೃತಿಕ ಸಂಜೆ

ದಿನಾಂಕ : 2-12-2002ರ ಸೋಮವಾರದಂದು ಕುವೆಂಪು ರಂಗಮಂದಿರದಲ್ಲಿ ಸ್ಕೌಟ್, ಗೈಡ್ ಮಕ್ಕಳ ಸಾಂಸ್ಕೃತಿಕ ಸಂಜೆ ಕಾರ್ಯಕ್ರಮವನ್ನು ಶ್ರೀಮತಿ ರೋಹಿಣಿ ನಾಗರಾಜ್, ಅಧ್ಯಕ್ಷರು, ಜಿಲ್ಲಾ ಪಂಚಾಯತ್ ಶಿವಮೊಗ್ಗ ಇವರು ಡ್ರಮ್ ಬಾರಿಸುವ ಮೂಲಕ ಉದ್ಘಾಟಿಸಿದರು. ಹಾಗೂ ಈ ಸಂಸ್ಥೆಗೆ ಜಿಲ್ಲಾ ಪರಿಷತ್ತಿನಿಂದ ನೆರವು ನೀಡಲು ಆಶ್ವಾಸನೆ



ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸಿದ ಗೈಡ್ಸ್ ತಂಡ

ನೀಡಿದರು. ಶ್ರೀ ಹೆಚ್.ಎಮ್. ಚಂದ್ರಶೇಖರಪ್ಪ ಶಾಸಕರು ಇವರು ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಕಾರ್ಯಕ್ರಮದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ಸ್ಕೌಟ್ ಗೈಡ್ ಚಟುವಟಿಕೆಗಳಿಗೆ ಹೆಚ್ಚಿನ ನೆರವು ನೀಡಲು ಜಿಲ್ಲಾ ಪಂಚಾಯಿತ್ ಅಧ್ಯಕ್ಷರಲ್ಲಿ ಮನವಿ ಮಾಡಿಕೊಂಡರು.

ನೃತ್ಯ, ಸಂಗೀತ, ಪ್ರಹಸನ ಇತ್ಯಾದಿ 16 ಕಾರ್ಯಕ್ರಮಗಳು ಮಕ್ಕಳಿಂದ ಪ್ರದರ್ಶಿಸಲ್ಪಟ್ಟವು. ಪೋಷಕರು, ಅಧ್ಯಾಪಕರು, ಸ್ಕೌಟರ್ಸ್, ಗೈಡರ್ಸ್ ಕಾರ್ಯಕ್ರಮವನ್ನು ವೀಕ್ಷಿಸಿ ಸಂತೋಷಪಟ್ಟರು. ಈ ಕಾರ್ಯಕ್ರಮ ಸಾರ್ವಜನಿಕರಲ್ಲಿ ಸ್ಕೌಟ್ ಗೈಡ್ ಚಟುವಟಿಕೆಗಳ ಬಗ್ಗೆ ಪರಿಚಯ ಮಾಡಿಕೊಡಲು ಸಹಕಾರಿಯಾಯಿತು.

ಜಿಲ್ಲಾ ಸ್ಕೌಟ್ ಕಮೀಷನರ್ ಶ್ರೀ ಎ.ಎಸ್. ಚಂದ್ರಶೇಖರ್ ಹಾಗೂ ಜಿಲ್ಲಾ ಗೈಡ್ ಕಮೀಷನರ್ ಶ್ರೀಮತಿ ಭಾರತಿ ಚಂದ್ರಶೇಖರ್ ಶಿವಮೊಗ್ಗೆಯ ವಿವಿಧ ಬಡಾವಣೆಯಲ್ಲಿ ಘಟಕಗಳನ್ನು ಪ್ರಾರಂಭಿಸಲು ಸಾರ್ವಜನಿಕರಲ್ಲಿ ಮನವಿ ಮಾಡಿಕೊಂಡರು.

ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಟಿ.ವಿ. ನಾರಾಯಣಶಾಸ್ತ್ರಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಗುರುರಾಜ್ ಗಿರಿ ಮಾಜಿ ಹಾಗೂ ಇತರೆ ಪದಾಧಿಕಾರಿಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.

## ಮೈಸೂರು ಗ್ರಾಮಾಂತರ ಜಿಲ್ಲೆ

ಚಾಮರಾಜನಗರ ತಾಲ್ಲೂಕು ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ದಿನಾಂಕ : 20-11-02 ರಿಂದ 22-11-02ರ ವರೆವಿಗೆ ಸಿ.ಎಸ್.ಐ. ಹಿರಿಯ ಪ್ರಾಥಮಿಕ ಶಾಲೆ. ಚಾಮರಾಜನಗರ ಇಲ್ಲಿ ಪಟಾಲಂ ನಾಯಕರ ತರಬೇತಿ ಶಿಬಿರವು ನಡೆಯಿತು. 20-11-02 ರಂದು ಶಿಬಿರದ ಉದ್ಘಾಟನೆಯನ್ನು ಇನ್ನರ್ ವೀಲ್ ಸಂಸ್ಥೆಯ ಅಧ್ಯಕ್ಷಿಣಿಯಾದ ಶ್ರೀಮತಿ ಸುಧಾ ನಾಗಾರ್ಜುನ್‌ರವರು ನೆರವೇರಿಸಿದರು. ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಛೇರಿಯ ವಿಷಯ ಪರಿವೀಕ್ಷಕರಾದ ಶ್ರೀ ಸಿದ್ಧರಾಜಚಾರ್‌ರವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯ ಶಿಕ್ಷಣ ಸಂಯೋಜಕಾರಾದ ಶ್ರೀ ಮಹಾದೇವಪ್ಪನವರು ಆಗಮಿಸಿದ್ದರು. ತಾಲ್ಲೂಕಿನ ಸುಮಾರು 80 ಮಕ್ಕಳು ಶಿಬಿರದಲ್ಲಿ ಭಾಗವಹಿಸಿದ್ದು ಶಿಬಿರದ ನಾಯಕತ್ವವನ್ನು ಮೈಸೂರು ಗ್ರಾಮಾಂತರ ಜಿಲ್ಲೆಯ ಸಂಘಟನಾ ಆಯುಕ್ತರಾದ ಶ್ರೀ ವಿ.ಎಂ. ರಾಮಚಂದ್ರರವರು ವಹಿಸಿದ್ದರು.

## ಧಾರವಾಡ ಜಿಲ್ಲೆ



**ನರಗುಂದ ಸ್ಥಳೀಯ ಸಂಸ್ಥೆ ವತಿಯಿಂದ ಗುಡ್ಡದಲ್ಲಿ ವನಸಂಪತ್ತು ಬೆಳೆಸುವ ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸುತ್ತಿರುವುದು.**

## ವಿಶೇಷ ಸೂಚನೆ

ತಮ್ಮ ಜಿಲ್ಲೆಯಲ್ಲಿ ಹಾಗೂ ಸ್ಥಳೀಯ ಸಂಸ್ಥೆಗಳ ಮಟ್ಟದಲ್ಲಿ ನಡೆಯುವ ಮಕ್ಕಳ ಕಾರ್ಯಕ್ರಮಗಳ ತರಬೇತಿ ಶಿಬಿರಗಳು ರಾಷ್ಟ್ರೀಯ ಹಬ್ಬಗಳು, ಸಮುದಾಯ ಸೇವಾ ಶಿಬಿರಗಳು ಮುಂತಾದ ಚಟುವಟಿಕೆಗಳ ವರದಿಯನ್ನು ಛಾಯಾ ಚಿತ್ರಗಳೊಡನೆ ಸಂಕ್ಷಿಪ್ತವಾಗಿ ಬರೆದು **ಪ್ರತಿ ತಿಂಗಳ 10ನೇ ತಾರೀಖಿನೊಳಗೆ** ಈ ಕೆಳಗಿನ ವಿಳಾಸಕ್ಕೆ ಕಳುಹಿಸುವುದು.

**ಸಂಪಾದಕರು, ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಪತ್ರಿಕೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕೇಂದ್ರ, ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ, ಕೋಟೆ, ಬೆಂಗಳೂರು - 560 002.**



ಶ್ರೀ ಕೆ.ಹೆಚ್. ಗೋಪಾಲಕೃಷ್ಣೇಗೌಡ, ಆಯುಕ್ತರು ಯುವಜನ ಸೇವೆ ಹಾಗೂ ಕ್ರೀಡಾ ಇಲಾಖೆ, ಇವರು ದಿನಾಂಕ 6.12.2002 ರಂದು ಕೊಂಡಜ್ಜಿ ತರಬೇತಿ ಕೇಂದ್ರಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ದಿ|| ಕೊಂಡಜ್ಜಿ ಬಸಪ್ಪನವರ ಪ್ರತಿಮೆಗೆ ಮಾಲಾರ್ಪಣೆ ಮಾಡುತ್ತಿರುವುದು. ಅವರೊಂದಿಗೆ ಶ್ರೀಮತಿ ಸ್ಮಿತಾ ಗೋಪಾಲಕೃಷ್ಣೇಗೌಡ ಮತ್ತು ರಾಜ್ಯದ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರನ್ನು ಕಾಣಬಹುದು.

---

## ಸಂಸ್ಮರಣೆ

**ಸ್ಮರಿಸೋಣ ಬನ್ನಿ ಕನ್ನಡದ ಪುತ್ರ ಕೊಂಡಜ್ಜಿ ಬಸಪ್ಪರನ್ನು**<br>
**ಕಾಡ ನಂದನವ ಮಾಡಿ ಕೈಲಾಸ ಕಂಡವರನ್ನು**<br>
**ನಮಿಸೋಣ ಬನ್ನಿ ಕರುನಾಡ ಪುತ್ರ ಕೊಂಡಜ್ಜಿ ಬಸಪ್ಪರನ್ನ**<br>
**ತನು ಮನವನಿತ್ತು ಧನಧಾನ್ಯ ತಂದ ಧೀಮಂತ ಧೀರನನ್ನು**<br>
**ಕೊಂಡಜ್ಜಿ, ಶಾಂತಿ, ಬೆಸೆಂಟ್ ತೋಟ ಶಿಬಿರ ಕೇಂದ್ರಗಳನು**<br>
**ಸ್ಕೌಟ್ ಗೈಡ್ ಚಳುವಳಿಗೆ ಬೆಳೆಸಿ ಕೊಟ್ಟ ಕಾರುಣ್ಯ ನಿಧಿಯನು**<br>
**ನೆನೆಯೋಣ ಬನ್ನಿ ಭಾರತದ ಸುಪುತ್ರ ಸಮಾಜ ಸೇವಕನನು**<br>
**ಮೆರೆಸೋಣ ಭಾರತ್ ಸ್ಕೌಟ್ ಗೈಡ್ ಬಾವುಟವ ಉತ್ತುಂಗದಲಿ**

**ಬರೆದು ಹಾಡಿದವರು : ಪ್ರೇಮಾ ಬಿ. ಮಂಗಳೂರು**

*(14-11-2002 ರಂದು "ಕೊಂಡಜ್ಜಿ ಬಸಪ್ಪ ಸ್ಮರಣೆ - 20" ಕೊಂಡಜ್ಜಿ ಶಿಬಿರದಲ್ಲಿ ಜರುಗಿದ ಸರ್ವಧರ್ಮ ಪ್ರಾರ್ಥನಾ ಸಮಾರಂಭದಲ್ಲಿ ಕುಮಾರಿ ಪ್ರೇಮ ಮಂಗಳೂರು ಅವರು ಸಲ್ಲಿಸಿದ ನುಡಿ ನಮನ)*

# 14 Members From Karnataka to Participate in the 20th World Scout Jamboree at Thailand




**KS & G NEWS SERVICE**

*The World Organization of the Scout Movement has Organised the 20th World Scout Jamboree 2003 at Hadyao, Sattahip, Chonburi about 180 Kms east of Bangkok, Thailand from 28th December 2002 to 7th January 2003. The National Scout Organization of Thailand Will host the International Event and the Royal Thai Government is pleased to support this World Youth Event and extends its Warm Welcome to 20,000 Scouts from all over the World.*

## Jamboree Theme

*The Theme of the 20th World Scout Jamboree 2003 is **"SHARE OUR WORLD, SHARE OUR CULTURE".** This is a unique Opportunity for young people from all around the World to take part in this world Event in Scouting Spirit of Sharing, living and learning our cultural diversity, the "Cross Roads of Culture".*

## Programme of Activities (Global Development Village With Four Main Themes)

*1. Health, 2. Environment, 3. Human Rights 4. Peace and International understanding.*

*City of Science and Technology, Cross Roads of Culture, our Heritage, Tournament, A day Serving in the Community, Water Sports activities and Hike.*

*Sri. Kondajji B. Shanmukhappa, State Chief Commissioner of our State is appointed as Deputy Contingent Leader of Indian Contingent. The Karnataka Contingent Consists of Sri Chinnaswamy Reddy, State Secretary, Sri R.D. Murthy, Sri. M.K. Khan, State Council Members, Sri. Balesh Sasalatti, District Secretary, Belgaum, Prof R.N. Jadhav, Asst. Dist, Commissioner (Scout), Sri V.A. Satapute, Secretary LA, Gokak Sri. Riyaz Pasha, Scouter, Avishek, Suhail Syed, Ashwin Rajan, Sanath Krishna, Nachiketha K, Nikhil V. D'souza Scouts will be participating in the World Jamboree.*



**100** **2007**

A Hundred years of Promise
in 2007, Scouting will celebrate its Centenary

**The greatest contribution to education in the 20th century was made not by an educationist but by a soldier who founded the Scout Movement**

- George Bernard Shaw

Regd as News Paper (Magazine) No : **CPMG/KA/BGW-549/2002**




If not delivered please return to :

**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002

BOOK-POST

Published for : The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.